# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1076
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 15-03-2021
ಉತ್ತರಿಸುವ ಸಚಿವರು : ಅರಣ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಚಾಮರಾಜನಗರದಲ್ಲಿ ಕನ್ನಡ ಭವನ ನಿರ್ಮಾಣ ಕಾರ್ಯ ಯಾವಾಗ ಪೂರ್ಣಗೊಂಡಿದೆ; ಅದಕ್ಕೆ ತಗುಲಿರುವ ವೆಚ್ಚ ಎಷ್ಟು; | • ಚಾಮರಾಜನಗರದಲ್ಲಿ ಯಾವುದೇ ಕನ್ನಡ ಭವನ ನಿರ್ಮಾಣ ಮಾಡಿರುವುದಿಲ್ಲ.<br>• ಆದಾಗ್ಯೂ ಚಾಮರಾಜನಗರದಲ್ಲಿ ಜಿಲ್ಲಾ ರಂಗಮಂದಿರ ನಿರ್ಮಾಣ ಮಾಡಲಾಗುತ್ತಿದ್ದು, ಸದರಿ ಕಾಮಗಾರಿಗೆ ಒಟ್ಟು ರೂ. 630.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಚಾಮರಾಜನಗರ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಅನುದಾನದಲ್ಲಿ ಕಟ್ಟಡದ ಕಾಮಗಾರಿ ಪೂರ್ಣಗೊಂಡಿದ್ದು, ಒಳಾಂಗಣ ಕಾಮಗಾರಿಗಳು ಪ್ರಾರಂಭದ ಹಂತದಲ್ಲಿದೆ. |
| 2 | ಇದುವರೆಗೆ ಕನ್ನಡ ಭವನವನ್ನು ಸಾರ್ವಜನಿಕ ಉಪಯೋಗಕ್ಕೆ ಮುಕ್ತಗೊಳಿಸದಿರಲು ಕಾರಣಗಳೇನು; ಕೂಡಲೇ ಕನ್ನಡ ಭವನವನ್ನು ಸಾರ್ವಜನಿಕ ಉಪಯೋಗಕ್ಕೆ ಒದಗಿಸಲು ಕ್ರಮ ತೆಗೆದುಕೊಳ್ಳಲಾಗುವುದೇ? | • ಚಾಮರಾಜನಗರದಲ್ಲಿ ಜಿಲ್ಲಾ ರಂಗಮಂದಿರದ ಒಳಾಂಗಣ ಕಾಮಗಾರಿಗಳ ಸಂಬಂಧ ರೂ. 230.00 ಲಕ್ಷಗಳ ಅಂದಾಜು ವೆಚ್ಚಪಟ್ಟಿಗೆ ಸರ್ಕಾರದ ಆದೇಶ ಸಂಖ್ಯೆ: ಕಸಂವಾ 110 ಕಸಧ 2020, ದಿನಾಂಕ: 29.12.2020 ರನ್ವಯ ಆಡಳಿತಾತ್ಮಕ ಮಂಜೂರಾತಿ ನೀಡಿದೆ. ಕಾಮಗಾರಿ ಏಜೆನ್ಸಿಯಾದ ಲೋಕೋಪಯೋಗಿ ಇಲಾಖೆಗೆ ಕೆಲಸ ಪ್ರಾರಂಭಿಸಲು ತಿಳಿಸಲಾಗಿದೆ. ಜಿಲ್ಲಾ ರಂಗಮಂದಿರದ ಒಳಾಂಗಣ ಕಾಮಗಾರಿ ಪೂರ್ಣಗೊಂಡ ನಂತರ ಸಾರ್ವಜನಿಕ ಉಪಯೋಗಕ್ಕೆ ಒದಗಿಸಲು ಕ್ರಮ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಕಸಂವಾ 14 ಕವಿಸ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು